# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1096 (949) |
| ಸದಸ್ಯರ ಹೆಸರು | : | ಶ್ರೀ ಎಂ.ನಾರಾಯಣಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವವರು | : | ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸಚಿವರು |
| ಉತ್ತರಿಸುವ ದಿನಾಂಕ | : | 29.09.2020 |

<table>
<tr><th>ಕ್ರ.ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ</td><td>ಇನ್ವೆಸ್ಟ್ ಕರ್ನಾಟಕ ಎಂಬ ಸಮಾವೇಶವನ್ನು ಮಾಡಿ ಈ ತನಕ ಎಷ್ಟು ಹೊಸ ಕಂಪನಿಗಳಿಗೆ ಬಂಡವಾಳ ಹೂಡಿಕೆದಾರರನ್ನು ಆಕರ್ಷಿಸಲಾಗಿದೆ; ಹಾಗೂ ಅವು ಯಾವುವು; ಎಷ್ಟು ಬಂಡವಾಳ ಹೂಡಿಕೆ ಆಗಿದೆ;</td><td rowspan="2">2000, 2010, 2012 ಮತ್ತು 2016 ರಲ್ಲಿ ಜಾಗತಿಕ ಬಂಡವಾಳ ಹೂಡಿಕೆದಾರರ ಸಮಾವೇಶ/ ಇನ್ವೆಸ್ಟ್‌ಕರ್ನಾಟಕ ಕಾರ್ಯಕ್ರಮಗಳನ್ನು ಆಯೋಜಿಸಲಾಗಿದೆ. ಸದರಿ ಸಮಾವೇಶಗಳಲ್ಲಿ ಆದಂತಹ ಒಪ್ಪಂದಗಳು ; ಹೂಡಿಕೆಯ ಮೊತ್ತ; ಉದ್ಯೋಗ ಅವಕಾಶಗಳ ವಿವರಗಳು ಕೆಳಕಂಡಂತಿದೆ.
<table>
<tr><th>ಸಮಾವೇಶ</th><th>ಒಡಂಬಡಿಕೆ/ ಅನುಮೋದನೆಯಾದ ಯೋಜನೆಗಳ ವಿವರ</th><th>ಬಂಡವಾಳ ಹೂಡಿಕೆ (ರೂ.ಕೋಟಿ ಗಳಲ್ಲಿ)</th><th>ಉದ್ಯೋಗ ಸೃಜನೆ</th></tr>
<tr><td>2000 ವಿಶ್ವ ಬಂಡವಾಳ ಹೂಡಿಕೆದಾರರ ಸಮಾವೇಶ (5 ಮತ್ತು 8 ಜೂನ್ 2000)</td><td>254</td><td>27160.00</td><td>98965</td></tr>
<tr><td>2010 ವಿಶ್ವ ಬಂಡವಾಳ ಹೂಡಿಕೆದಾರರ ಸಮಾವೇಶ (4 ಮತ್ತು 5 ಜೂನ್ 2010)</td><td>389</td><td>392768.00</td><td>735292</td></tr>
<tr><td>2012 ವಿಶ್ವ ಬಂಡವಾಳ ಹೂಡಿಕೆದಾರರ ಸಮಾವೇಶ (7 ಮತ್ತು 8 ಜೂನ್ 2012)</td><td>751</td><td>677068.00</td><td>1527687</td></tr>
<tr><td>2016 ಇನ್ವೆಸ್ಟ್ ಕರ್ನಾಟಕ ಸಮಾವೇಶ (3,4 ಮತ್ತು 5 ಫೆಬ್ರವರಿ 2016)</td><td>1202</td><td>305584.00</td><td>652018</td></tr>
</table>
ಸದರಿ ಬಂಡವಾಳ ಹೂಡಿಕೆ ಸಮಾವೇಶಗಳಿಂದ ರಾಜ್ಯದಲ್ಲಿ 372 ಯೋಜನೆಗಳು ಅನುಷ್ಠಾನಗೊಂಡಿದ್ದು, ಒಟ್ಟು ರೂ.129399 ಕೋಟಿ ಬಂಡವಾಳ ಹೂಡಿಕೆಯಾಗಿದೆ ಹಾಗೂ 318624 ಜನರಿಗೆ ಉದ್ಯೋಗ ಸೃಜನೆಯಾಗಿದೆ. ಉಳಿದಂತೆ, 1418 ಯೋಜನೆಗಳು ವಿವಿಧ ಅನುಷ್ಠಾನ ಹಂತಗಳಲ್ಲಿ ಅನುಷ್ಠಾನಗೊಳ್ಳುತ್ತಿದ್ದು, ಇವುಗಳಿಂದ ರೂ.556712.00 ಕೋಟಿ ಬಂಡವಾಳ ಹೂಡಿಕೆಯಾಗಲಿದೆ.</td></tr>
<tr><td>ಆ</td><td>ಇದರಿಂದ ಎಷ್ಟು ಉದ್ಯೋಗ ಸೃಷ್ಟಿಯಾಗಿವೆ;</td></tr>
</table>

| | | |
|---|---|---|
| ಇ | ಕೈಗಾರಿಕ ಸ್ನೇಹಿ ಪಟ್ಟಿಯಿಂದ ಕರ್ನಾಟಕ ರಾಜ್ಯ ಕೆಳಗಿಳಿದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | 2019ರ ಸಾಲಿಗೆ ಕೈಗಾರಿಕೆ ಮತ್ತು ಆಂತರಿಕ ವ್ಯವಹಾರ ಉತ್ತೇಜನ ಇಲಾಖೆ ಭಾರತ ಸರ್ಕಾರದಿಂದ ಪ್ರಕಟವಾದ ಉದ್ಯಮ ಸ್ನೇಹಿ ರಾಜ್ಯಗಳ ಪಟ್ಟಿಯಲ್ಲಿ (Ease of Doing Business) ಒಟ್ಟು ನೀಡಲಾಗಿರುವ 29 ಸ್ಥಾನಗಳಲ್ಲಿ ರಾಜ್ಯವನ್ನು 17ನೇ ಸ್ಥಾನದಲ್ಲಿ ಗುರುತಿಸಲಾಗಿದೆ. |
| ಈ | ಬಂದಿದ್ದಲ್ಲಿ, ಇದಕ್ಕೆ ಕಾರಣವೇನು; ಈ ಕುರಿತು ಕೈಗೊಳ್ಳಲಾದ ಕ್ರಮವೇನು? | 2019ರ ಸಾಲಿನಲ್ಲಿ ಕೇಂದ್ರ ಸರ್ಕಾರವು ನೀಡಲಾಗಿದ್ದ ಒಟ್ಟು 187 ಸುಧಾರಣಾ ಅಂಶಗಳ ಅನುಷ್ಠಾನದ ಗುರಿಯನ್ನು ಕರ್ನಾಟಕ ರಾಜ್ಯವು ಸೇರಿದಂತೆ ಒಟ್ಟು 6 ರಾಜ್ಯಗಳು ಮಾತ್ರ 187 ಅಂಶಗಳನ್ನು ಅನುಷ್ಠಾನಗೊಳಿಸಿದ್ದು ಇದನ್ನು ಕೈಗಾರಿಕೆ ಮತ್ತು ಆಂತರಿಕ ವ್ಯವಹಾರ ಉತ್ತೇಜನ ಇಲಾಖೆ ಭಾರತ ಸರ್ಕಾರದ (DPIIT-Business Reform Action Plan) ವೆಬ್‌ಸೈಟ್ ಅಲ್ಲಿ ಪ್ರಕಟಿಸಲಾಗಿದೆ. ಮುಂದುವರೆದಂತೆ ರಾಜ್ಯಗಳಿಗೆ ರ್‍ಯಾಂಕ್‌ಗಳನ್ನು ನೀಡುವ ಮಾನದಂಡದ ಸಂದರ್ಭದಲ್ಲಿ ಸುಧಾರಣಾ ಅಂಶಗಳ ಅನುಷ್ಠಾನದೊಂದಿಗೆ ಈ ಅಂಶಗಳಿಗೆ ಒಳಪಟ್ಟಂತೆ ಸೇವೆಗಳನ್ನು ಪಡೆಯಲಾಗಿರುವ ಉದ್ಯಮಶೀಲರು/ ಕೈಗಾರಿಕೋದ್ಯಮಿಗಳು ನೀಡುವ ಪ್ರತಿಕ್ರಿಯೆಗಳು (feedback) ಸಹ ಒಳಗೊಂಡಿರುತ್ತದೆ. ಉದ್ಯಮಶೀಲರು/ಕೈಗಾರಿಕೋದ್ಯಮಿಗಳಿಗೆ ರಾಜ್ಯದಲ್ಲಿ ಲಭ್ಯವಿರುವ ಸೇವೆಗಳ ವಿವರಗಳನ್ನು ಸಕಾಲದಲ್ಲಿ ನೀಡಲಾಗಿತ್ತು.<br><br>2020ರ ಸದರಿ ಸಾಲಿಗೆ ಉದ್ಯಮ ಸ್ನೇಹಿ (Ease of Doing Business)– 2020ರ ಅಡಿಯಲ್ಲಿ ರಾಜ್ಯದಲ್ಲಿ ಒಟ್ಟು 301 ಸುಧಾರಣಾ ಅಂಶಗಳನ್ನು ಅನುಷ್ಠಾನಗೊಳಿಸಲು ವಿವರಗಳನ್ನು ಕೈಗಾರಿಕೆ ಮತ್ತು ಆಂತರಿಕ ವ್ಯವಹಾರ ಉತ್ತೇಜನ ಇಲಾಖೆ ಭಾರತ ಸರ್ಕಾರದಿಂದ ನೀಡಲಾಗಿದ್ದು ಅದರಂತೆ ಸದರಿ ವರ್ಷದಲ್ಲಿ ರಾಜ್ಯಕ್ಕೆ ಹೆಚ್ಚಿನ ಸ್ಥಾನ ದೊರಕಿಸಿಕೊಳ್ಳಲು ಅವಶ್ಯವಿರುವ ಎಲ್ಲಾ ಪೂರಕ ಕ್ರಮಗಳನ್ನು ಕೈಗೊಳ್ಳಲಾಗುತ್ತಿದ್ದು ಸಂಬಂಧಿಸಿದ ಎಲ್ಲಾ ಇಲಾಖೆಗಳೊಂದಿಗೆ ಕ್ರಮವಹಿಸಲಾಗುತ್ತಿದೆ. ಅಲ್ಲದೆ ಮುಖ್ಯ ಕಾರ್ಯದರ್ಶಿಗಳು, ಕರ್ನಾಟಕ ಸರ್ಕಾರರವರ ನೇತೃತ್ವದಲ್ಲಿ ಆಗಿಂದ್ದಾಗ್ಗೆ ಸುಧಾರಣಾ ಅಂಶಗಳ ಅನುಷ್ಠಾನ ಕುರಿತಂತೆ ಸಭೆಗಳನ್ನು ಆಯೋಜಿಸುವ ಮೂಲಕ ಕ್ರಮ ಕೈಗೊಳ್ಳಲಾಗುತ್ತಿದೆ. |

ಸಿಐ 270 ಎಸ್‌ಪಿಐ 2020

(ಜಗದೀಶ್ ಶೆಟ್ಟರ್)
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ
ಸಾರ್ವಜನಿಕ ಉದ್ದಿಮೆಗಳ ಸಚಿವರು